# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1937 |
| ಸದಸ್ಯರ ಹೆಸರು | : | ಶ್ರೀಮತಿ ವೀಣಾ ಅಚ್ಚಯ್ಯ |
| ಉತ್ತರಿಸಬೇಕಾದ ದಿನಾಂಕ | : | 26.03.2020 |
| ಉತ್ತರಿಸುವ ಸಚಿವರು | : | ಮುಖ್ಯಮಂತ್ರಿ |

******

| | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ರೈತರ ಕೃಷಿ ಪಂಪ್‌ಸೆಟ್ ಗಳಿಗೆ ಟ್ರಾನ್ಸ್‌ಫಾರ್ಮರ್ ಗಳನ್ನು ಅಳವಡಿಸಲು ಸರ್ಕಾರ ಅನುಸರಿಸುತ್ತಿರುವ ಮಾನದಂಡ ಹಾಗೂ ನಿಯಮಗಳು ಯಾವುವು; | ರಾಜ್ಯದಲ್ಲಿನ ರೈತರ ಕೃಷಿ ಪಂಪ್‌ಸೆಟ್‌ಗಳಿಗೆ ವಿದ್ಯುತ್ ಸಂಪರ್ಕ ಕೋರಿ ಸಲ್ಲಿಸಿರುವ ಅರ್ಜಿಗಳಿಗೆ ಸ್ಥಳ ಪರಿಶೀಲನೆ ಮಾಡಿ ಹತ್ತಿರವಿರುವ ವಿದ್ಯುತ್ ಮಾರ್ಗದ ಲಭ್ಯತೆ ಮತ್ತು ಪರಿವರ್ತಕದ ಹೊರೆಯನ್ನು ಪರಿಶೀಲಿಸಿ ತಾಂತ್ರಿಕ ಸಾಧ್ಯತೆಗೆ ಅನುಗುಣವಾಗಿ ಅವಶ್ಯವಿದ್ದಲ್ಲಿ ಹೊಸದಾಗಿ ಪರಿವರ್ತಕವನ್ನು ಅಳವಡಿಸಿ, ವಿದ್ಯುತ್ ಸಂಪರ್ಕವನ್ನು ಕಲ್ಪಿಸಲಾಗುತ್ತಿದೆ.<br><br>ರೈತರ ಕೃಷಿ ಪಂಪ್‌ಸೆಟ್‌ಗಳಿಗೆ ಅಳವಡಿಸಲಾಗಿರುವ ಪರಿವರ್ತಕಗಳು ಓವರ್ ಲೋಡ್ ಆಗಿದ್ದಲ್ಲಿ, ಅವುಗಳನ್ನು ಗುರುತಿಸಿ, ವಿಸ್ತರಣೆ ಮತ್ತು ವ್ಯವಸ್ಥೆ ಸುಧಾರಣೆಯಡಿ ಸದರಿ ಪರಿವರ್ತಕಗಳ ಸಾಮರ್ಥ್ಯವನ್ನು ಹೆಚ್ಚಳಗೊಳಿಸಲು ಅಥವಾ ಹೆಚ್ಚುವರಿ ಪರಿವರ್ತಕಗಳನ್ನು ಅಳವಡಿಸಲು ಕ್ರಮ ಕೈಗೊಳ್ಳಲಾಗುತ್ತಿದೆ.<br><br>ಅಲ್ಲದೇ, ಗಂಗಾ ಕಲ್ಯಾಣ ಯೋಜನೆ, ಅನಧಿಕೃತ ನೀರಾವರಿ ಪಂಪ್‌ಸೆಟ್‌ಗಳನ್ನು ಸಕ್ರಮಗೊಳಿಸುವ ಯೋಜನೆಗಳಡಿಯಲ್ಲಿಯೂ ಸಹ ಅವಶ್ಯಕತೆ ಇರುವ ಕಡೆ ಹೊಸದಾಗಿ ಟ್ರಾನ್ಸ್ ಫಾರ್ಮರ್‌ಗಳನ್ನು ಅಳವಡಿಸಲಾಗುತ್ತಿದೆ.<br><br>ಹೊಸದಾಗಿ ನೋಂದಣಿಗೊಳ್ಳುವ ಅರ್ಜಿಗಳಿಗೆ ಪ್ರತಿ 2 ರಿಂದ 3 ಕೃಷಿ ಪಂಪ್‌ಸೆಟ್‌ಗಳಿಗೆ ಒಂದರಂತೆ 25 ಕೆವಿಎ ಸಾಮರ್ಥ್ಯದ ಪರಿವರ್ತಕವನ್ನು ಅಳವಡಿಸಿ, ಹಾಲಿ ಪರಿವರ್ತಕಗಳು ಓವರ್‌ಲೋಡ್ ಆಗುವುದನ್ನು ತಡೆಗಟ್ಟಲಾಗುತ್ತಿದೆ. |
| ಆ) | ಕೊಡಗು ಜಿಲ್ಲೆಯಲ್ಲಿ ಬೇಡಿಕೆಗನುಸಾರ ರೈತರ ಕೃಷಿ ಪಂಪ್‌ಸೆಟ್‌ಗಳಿಗೆ ಟ್ರಾನ್ಸ್‌ಫಾರ್ಮರ್ ಗಳನ್ನು ಅಳವಡಿಸುವ ಕಾರ್ಯ ಸಂಪೂರ್ಣವಾಗಿ ಮುಗಿದಿದೆಯೇ; | ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮ ನಿಯಮಿತ ವ್ಯಾಪ್ತಿಯ ಕೊಡಗು ಜಿಲ್ಲೆಯಲ್ಲಿ ಒಟ್ಟು 12276 ಸಂಖ್ಯೆ ಕೃಷಿ ಪಂಪ್‌ಸೆಟ್‌ಗಳು ಕಾರ್ಯನಿರ್ವಹಿಸುತ್ತಿವೆ.<br><br>2019–20ನೇ ಸಾಲಿನಲ್ಲಿ ಫೆಬ್ರವರಿ–2020ರ ಅಂತ್ಯಕ್ಕೆ ರೈತರ ಕೃಷಿ ಪಂಪ್‌ಸೆಟ್‌ಗಳಿಗೆ ವಿದ್ಯುತ್ ಸಂಪರ್ಕ ಕೋರಿ ಬಂದಿರುವ ಅರ್ಜಿಗಳ ಒಟ್ಟು ಸಂಖ್ಯೆ 184. ಅವುಗಳ ಪೈಕಿ ಈಗಾಗಲೇ 130 ಸಂಖ್ಯೆಯ ಅರ್ಜಿಗಳಿಗೆ ಪ್ರತ್ಯೇಕವಾಗಿ ಪರಿವರ್ತಕಗಳನ್ನು ಅಳವಡಿಸಿ ವಿದ್ಯುತ್ ಸಂಪರ್ಕ ಕಲ್ಪಿಸಲಾಗಿರುತ್ತದೆ. ಬಾಕಿ ಉಳಿದ 54 ಸಂಖ್ಯೆಯ ಅರ್ಜಿಗಳಿಗೆ ಪರಿವರ್ತಕಗಳನ್ನು ಅಳವಡಿಸಲು ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮ ನಿಯಮಿತದ ವತಿಯಿಂದ ಎಲ್ಲಾ ಅಗತ್ಯ ಕ್ರಮಗಳನ್ನು ಕೈಗೊಳ್ಳಲಾಗಿರುತ್ತದೆ.<br><br>ಅಲ್ಲದೇ, ರೈತರ ಕೃಷಿ ಪಂಪ್‌ಸೆಟ್‌ಗಳ ವಿಫಲಗೊಂಡ ಪರಿವರ್ತಕಗಳನ್ನು 72 ಗಂಟೆಗಳೊಳಗೆ ಬದಲಾಯಿಸಲು ಕ್ರಮ ವಹಿಸಲಾಗುತ್ತಿದೆ.<br><br>2019–20ನೇ ಸಾಲಿನಲ್ಲಿ ಫೆಬ್ರವರಿ–2020 ರ ಅಂತ್ಯಕ್ಕೆ ಕೊಡಗು ಜಿಲ್ಲೆಯಲ್ಲಿ ಒಟ್ಟಾರೆಯಾಗಿ 514 ಸಂಖ್ಯೆಯ ಪರಿವರ್ತಕಗಳು ವಿಫಲಗೊಂಡಿದ್ದು, ಎಲ್ಲಾ ಪರಿವರ್ತಕಗಳನ್ನು ಬದಲಾಯಿಸಲಾಗಿರುತ್ತದೆ. |

**ಸಂಖ್ಯೆ: ಎನರ್ಜಿ 83 ಇಬಿಎಸ್ 2020**

(ಬಿ.ಎಸ್.ಯಡಿಯೂರಪ್ಪ)

ಮುಖ್ಯಮಂತ್ರಿ